# ಮೇಘಾಲಯದಲ್ಲಿ ಶಿಕ್ಷಕರ ಶಿಕ್ಷಣದ ಅಭಿವೃದ್ಧಿ

ಬಾಶಾನ್ ಡಿ.ಎಂ. ಡೈಂಗ್ಡೋಹ್



ರಾಜ್ಯದಲ್ಲಿ ಶಿಕ್ಷಕರ ಅಗತ್ಯಗಳನ್ನು ಪೂರೈಸಲು ಕ್ರಮೇಣವಾಗಿ ಶಿಕ್ಷಕರ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿಗಾಗಿ ಚಿರಾಪುಂಜಿಯ ವೆಲ್ಷ್ ಮಿಷನ್ ಮೂಲಕ ಥಿಯೋಲಾಜಿಕಲ್ ಕಾಲೇಜಿನ ಅಧೀನದಲ್ಲಿ ಮೊದಲ ಶಿಕ್ಷಕರ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಲಾಯಿತು. ಚಿರಾಪುಂಜಿಯ ಸಾಮಾನ್ಯ ಶಾಲೆಯ ತರಬೇತಿ ಶಾಲಾ ವಿಭಾಗವನ್ನು ನೊಂಗ್ಸಾವ್ಲಿಯಾದಿಂದ ಶಿಲ್ಲಾಂಗ್‌ಗೆ ಸಂಯೋಜಿಸಲು 1861ರಲ್ಲಿ ಸರ್ಕಾರವು ನಿರ್ಧರಿಸಿತು ಮತ್ತು ಮೌಖರ್ ಶಿಲ್ಲಾಂಗ್ ನಲ್ಲಿರುವ ವೆಲ್ಷ್ ಮಿಷನ್ ಹೈಸ್ಕೂಲ್‌ಗೆ ಅದನ್ನು ಸೇರಿಸಲಾಯಿತು. 1946ರ ಸಮಯಕ್ಕೆ, ಅದೇ ಕಟ್ಟಡದಲ್ಲಿ ತರಬೇತಿ ಶಾಲೆಯು ಕಾರ್ಯನಿರ್ವಹಿಸಿತು. 1947ರಲ್ಲಿ ಸ್ವಾತಂತ್ರ್ಯ ಬಂದ ನಂತರ, ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ತರಬೇತಿ ಸೌಲಭ್ಯವನ್ನು ವಿಸ್ತರಿಸಲು ವೆಲ್ಷ್ ಮಿಷನ್ ಅವರನ್ನು ಭಾರತ ಸರ್ಕಾರವು ವಿನಂತಿಸಿತು. ನಂತರ ತರಬೇತಿ ಶಾಲೆಯು ಪ್ರೆಸ್ಬಿಟೇರಿಯನ್ ಚರ್ಚ್‌ನ ನಿರ್ವಹಣೆಯಡಿಯಲ್ಲಿ ಚೆರ್ರಾ ಶಿಕ್ಷಕರ ತರಬೇತಿ ಕೇಂದ್ರ ಎಂದು ಕರೆಯಲ್ಪಟ್ಟಿತು.

1906ರಲ್ಲಿ ಸರ್ಕಾರವು BTC (ಮೂಲ ತರಬೇತಿ ಕೇಂದ್ರ) ಸ್ಥಾಪನೆಗೂ ಬಹಳ ಹಿಂದೆಯೇ, 30 ತರಬೇತುದಾರರ ಪ್ರವೇಶಾತಿಯ ಸಾಮರ್ಥ್ಯದೊಂದಿಗೆ ತುರಾದಲ್ಲಿ ಗುರು ತರಬೇತಿ ಶಾಲೆಯನ್ನು (GTS) ಪ್ರಾರಂಭಿಸಿತು. ಇದು ಗಾರೊ ಹಿಲ್ಸ್‌ನಲ್ಲಿನ ಪ್ರಾಥಮಿಕ ಶಿಕ್ಷಕರ ತರಬೇತಿ ಅಗತ್ಯಗಳನ್ನು ಪೂರೈಸಿತ್ತಾದರೂ, ಆಡಳಿತಾತ್ಮಕ ಸಮಸ್ಯೆಯಿಂದಾಗಿ, ಅದು ಅಸ್ತಿತ್ವಕ್ಕೆ ಬಂದು ಒಂಬತ್ತು ದಶಕಗಳ ನಂತರ ಕೆಲವು ವರ್ಷಗಳ ಹಿಂದೆ ಕಾರ್ಯಾಚರಣೆಯನ್ನು ನಿಲ್ಲಿಸಿತು.

ಶಿಲ್ಲಾಂಗ್ನ ಸೇಂಟ್ ಎಡ್ಮಂಡ್ ಕಾಲೇಜಿನಿಂದ ಪಡೆದ ಮೌಖಿಕ ಮಾಹಿತಿಯ ಪ್ರಕಾರ, 1934ರಲ್ಲಿ ಶಿಲ್ಲಾಂಗ್‌ನಲ್ಲಿ ಸ್ಥಾಪನೆಯಾದ ಸೇಂಟ್ ಎಡ್ಮಂಡ್ ಬಿ.ಟಿ. ಕಾಲೇಜನ್ನು 1942ರಲ್ಲಿ ಮುಚ್ಚಲಾಯಿತು. ಮಹಿಳಾ ಬಿ.ಟಿ. ಕಾಲೇಜಿನ ವಿನಂತಿ ಮತ್ತು ತೀವ್ರ ಅಗತ್ಯಕ್ಕೆ ಪ್ರತಿಕ್ರಿಯೆಯಾಗಿ 1937ರಲ್ಲಿ ಸೇಂಟ್ ಮೇರಿಸ್ ಬಿ.ಟಿ. ಕಾಲೇಜನ್ನು ಪ್ರಸ್ತುತದ ಸೇಂಟ್ ಮೇರಿಸ್ ಕಾಲೇಜ್ ಆಫ್ ಟೀಚರ್ ಎಜುಕೇಶನ್ ಎಂಬ ಹೆಸರಿನಲ್ಲಿ ಸ್ಥಾಪಿಸಲಾಯಿತು. ಇದು 1938ರಲ್ಲಿ ಕೊಲ್ಕತ್ತಾ ವಿಶ್ವವಿದ್ಯಾನಿಲಯಕ್ಕೆ, ನಂತರ 1948ರಲ್ಲಿ ಗುವಾಹಟಿ ವಿಶ್ವವಿದ್ಯಾನಿಲಯಕ್ಕೆ ಮತ್ತು ತದನಂತರ 1973ರಲ್ಲಿ ಶಿಲ್ಲಾಂಗ್‌ನ ಈಶಾನ್ಯ ಹಿಲ್ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡಿತು. ಪದವಿ ಕಾಲೇಜಿನ ಶಿಕ್ಷಕರ ಸಹಾಯದಿಂದಾಗಿ 1998ರವರೆಗೆ ಅರೆಕಾಲಿಕ ಕೋರ್ಸ್ ಅನ್ನು ಈ ಕಾಲೇಜು ನಡೆಸಿತು. ಇದು ಈಶಾನ್ಯ ರಾಜ್ಯಗಳ ಪ್ರಪ್ರಥಮ ಬಿ.ಟಿ. ಮಹಿಳಾ ಕಾಲೇಜು ಎಂದೇ ಹೇಳಲಾಗಿದ್ದು, ಕಳೆದ 60 ವರ್ಷಗಳಿಂದ ಮಾಧ್ಯಮಿಕ ಮಟ್ಟದ ಶಿಕ್ಷಕರ ಶಿಕ್ಷಣ ಕ್ಷೇತ್ರದಲ್ಲಿ ಮಹಾನ್ ಸೇವೆ ಸಲ್ಲಿಸುತ್ತಿದೆಯಲ್ಲದೆ, ಅತ್ಯುತ್ತಮ ಬಿ.ಎಡ್ (B.Ed) ಕಾಲೇಜು ಎಂದೂ ಸಹ ಪರಿಗಣಿಸಲಾಗಿದೆ. ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಮಂಡಳಿ 1993ರ (ನ್ಯಾಷನಲ್ ಕೌನ್ಸಿಲ್ ಆಫ್ ಟೀಚರ್ ಎಜುಕೇಶನ್ – NCTE ಕಾಯಿದೆ 1993) ಅಡಿಯಲ್ಲಿ, ನಿಯಮಗಳ ಅನುಷ್ಠಾನದೊಂದಿಗೆ ಕಾಲೇಜು ಪೂರ್ಣ ಪ್ರಮಾಣದ ಶಿಕ್ಷಕರ ಶಿಕ್ಷಣದ ಕಾಲೇಜು ಆಗಿ ಕಾರ್ಯ ನಿರ್ವಹಿಸುತ್ತಿದೆ, 100 ವಿದ್ಯಾರ್ಥಿ ಶಿಕ್ಷಕರ ಅನುಮೋದಿತ ಪ್ರವೇಶಾವಕಾಶದೊಂದಿಗೆ ಒಂದು ವರ್ಷದ B.Ed ಕೋರ್ಸ್ ಅನ್ನು ನಡೆಸುತ್ತಿದೆ.

ಇಂಗ್ಲೆಂಡಿನ ಸಾಮಾಜಿಕ ಕಾರ್ಯಕರ್ತೆ ಹಾಗೂ ಮಹಾತ್ಮಾ ಗಾಂಧಿಯವರು ಪ್ರಚಾರ ಮಾಡಿದ ಶಿಕ್ಷಣದ ಮೂಲಭೂತ ಯೋಜನೆಯಡಿಯಲ್ಲಿ, ಶಿಕ್ಷಣ ತಜ್ಞರಾದ ಶ್ರೀಮತಿ. ಮಾರ್ಗರೆಟ್ ಬರ್ ಅವರು 1940ರಲ್ಲಿ ಶಿಲ್ಲಾಂಗ್ ನ ಮಾಲ್ಕಿಯಲ್ಲಿ 'ಮೂಲ ತರಬೇತಿ ಕೇಂದ್ರ'ವನ್ನು (ಬೇಸಿಕ್ ಟ್ರೈನಿಂಗ್ ಸೆಂಟರ್ (BTC) ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದರು. ನಂತರ 1955ರಲ್ಲಿ ಪಶ್ಚಿಮ ಗಾರೊ ಹಿಲ್ಸ್‌ನ ರೊಂಗ್ರೆನ್ಗ್ರೆನ್‌ನಲ್ಲಿ, 1967ರಲ್ಲಿ ಜೈನ್ತಿಯ ಹಿಲ್ಸ್‌ನ ಥದ್ಲಸ್ಕೈನ್‌ನಲ್ಲಿ ಮತ್ತು 1974ರಲ್ಲಿ ಪಶ್ಚಿಮ ಗಾರೊ ಹಿಲ್ಸ್‌ನ ರೆಸುಬೆಲ್ಪಾರಾದಲ್ಲಿ ಮೂಲ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಯಿತು.

ಮಾಧ್ಯಮಿಕ/ಪ್ರೌಢ ಶಾಲೆಗಳಲ್ಲಿ ಬೋಧಿಸುವ ಪದವೀಧರ ಶಿಕ್ಷಕರಿಗೆ ಪದವಿ ಮಟ್ಟದಲ್ಲಿ ತರಬೇತಿಯನ್ನು ನೀಡುವ ಸಲುವಾಗಿ 1964 ರಲ್ಲಿ ಪೋಸ್ಟ್ ಗ್ರಾಜುಯೇಟ್ ಟ್ರೈನಿಂಗ್ ಕಾಲೇಜ್, ಶಿಲ್ಲಾಂಗ್ ಅನ್ನು ಪ್ರಸ್ತುತದ, ಕಾಲೇಜ್ ಆಫ್ ಟೀಚರ್ ಎಜುಕೇಶನ್,(PGT), ಶಿಲ್ಲಾಂಗ್ ನ ಹೆಸರಿನಲ್ಲಿ ಸ್ಥಾಪಿಸಲಾಯಿತು. ಶಿಕ್ಷಕರ ತರಬೇತಿ ಅಗತ್ಯತೆಗಳನ್ನು ಪೂರೈಸುವ ಸಲುವಾಗಿ ಆರಂಭದಲ್ಲಿ, ಒಂದು ವರ್ಷದ ಅವಧಿಯಲ್ಲಿ ಪೂರ್ಣಾವಧಿ ಮತ್ತು ಅರೆಕಾಲಿಕ ಕೋರ್ಸ್ ಅನ್ನು ಕಾಲೇಜು ನಡೆಸಿತು. ಈ ಎರಡೂ ಕಾರ್ಯಕ್ರಮಗಳಲ್ಲಿ ವರ್ಷಕ್ಕೆ ಅಂದಾಜು 300 ಶಿಕ್ಷಕರ ಪ್ರವೇಶಾವಕಾಶದ ಸಾಮರ್ಥ್ಯವನ್ನು ಕಾಲೇಜು ಪಡೆದಿತ್ತು. ನ್ಯಾಷನಲ್ ಕೌನ್ಸಿಲ್ ಆಫ್ ಟೀಚರ್ ಎಜುಕೇಶನ್ ನಿಯಮಗಳ (NCTE ಕಾಯ್ದೆ 1993ರ ಅಡಿಯಲ್ಲಿ ), ಅನುಷ್ಠಾನದೊಂದಿಗೆ ಕಾಲೇಜು ಪ್ರಸ್ತುತ ಪೂರ್ಣ ಪ್ರಮಾಣದ ಶಿಕ್ಷಕರ ಶಿಕ್ಷಣದ ಕಾಲೇಜು ಆಗಿ ಕಾರ್ಯ ನಿರ್ವಹಿಸುತ್ತಿದೆ ಮತ್ತು 100 ವಿದ್ಯಾರ್ಥಿ ಶಿಕ್ಷಕರ ಪ್ರವೇಶಾತಿಯ ಸಾಮರ್ಥ್ಯದೊಂದಿಗೆ ಪೂರ್ಣಾವಧಿಯ ಒಂದು ವರ್ಷದ ಬಿ.ಎಡ್ (B.Ed) ಕೋರ್ಸ್ ಅನ್ನು ನಡೆಸುತ್ತಿರುವ ಕಾರ್ಯಕ್ರಮವಾಗಿ ರೂಪುಗೊಂಡಿದೆ.

ಹಿರಿಯ ಪ್ರಾಥಮಿಕ ಹಂತದಲ್ಲಿ ಪ್ರಸ್ತುತ ಸೇವೆ ಸಲ್ಲಿಸುತ್ತಿರುವ ಶಿಕ್ಷಕರಿಗೆ ತರಬೇತಿ ನೀಡುವ ಉದ್ದೇಶದಿಂದಾಗಿ ಮಾಧ್ಯಮಿಕ ಅಥವಾ ಹಿರಿಯ ಪ್ರಾಥಮಿಕ ಹಂತಕ್ಕಾಗಿ ಎರಡು ಸಾಮಾನ್ಯ ತರಬೇತಿ ಶಾಲೆಗಳನ್ನು 1968ರಲ್ಲಿ ಸರ್ಕಾರ ಸ್ಥಾಪಿಸಿತು. ಅವುಗಳಲ್ಲಿ ಒಂದನ್ನು ಪೂರ್ವ ಖಾಸಿ ಹಿಲ್ಸ್‌ನ ಚಿರಾಪುಂಜಿಯಲ್ಲಿ ಹಾಗೂ ಮತ್ತೊಂದನ್ನು ಪಶ್ಚಿಮ ಗಾರೊ ಹಿಲ್ಸ್‌ನ ತುರಾದಲ್ಲಿ ನೋಡಬಹುದಾಗಿದೆ.

ಕಿಯಾಂಗ್ ನಂಗ್ ಬಾ ಬಿ.ಟಿ. ಕಾಲೇಜ್ ಅನ್ನು 1981ರಲ್ಲಿ ಜೊವಾಯಿ ಜಿಲ್ಲೆಯಲ್ಲಿ ಸ್ಥಾಪಿಸಲಾಯಿತು. ಜೊವಾಯಿ ಜಿಲ್ಲೆಯಲ್ಲಿನ ಮಾಧ್ಯಮಿಕ ಹಂತದಲ್ಲಿರುವ ಶಿಕ್ಷಕರಿಗೆ ತರಬೇತಿ ನೀಡುವ ಉದ್ದೇಶವನ್ನು ಇದು ಹೊಂದಿತ್ತು. NCTE ಮಾನದಂಡಗಳನ್ನು ಪರಿಚಯಿಸುವುದರ ಜೊತೆಗೆ ನಿಯಮಾವಳಿಗಳನ್ನು ಅನುಸರಿಸುವಲ್ಲಿ ವಿಫಲವಾದ ಕಾರಣ ಕಾಲೇಜು ತನ್ನೆಲ್ಲಾ ಕಾರ್ಯಾಚರಣೆಗಳನ್ನು ಮುಚ್ಚಬೇಕಾದ ಪರಿಸ್ಥಿತಿಗೆ ತಲುಪಿತು.

ಪಶ್ಚಿಮ ಗಾರೊ ಹಿಲ್ಸ್‌ನ ತುರಾದಲ್ಲಿರುವ ಸರ್ಕಾರಿ ಶಿಕ್ಷಕರ ಶಿಕ್ಷಣ ಕಾಲೇಜು 1993ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದು ರಾಜ್ಯದ ಗಾರೊ ಹಿಲ್ಸ್‌ನ ಮೂರು ಜಿಲ್ಲೆಗಳಲ್ಲಿ ಮಾಧ್ಯಮಿಕ ಹಂತದ ಶಿಕ್ಷಕರ ಅಗತ್ಯತೆಗಳನ್ನು ಪೂರೈಸುವುದು ಇದರ ಧ್ಯೇಯವಾಗಿತ್ತು. ಪ್ರಸ್ತುತ ಈ ಕಾಲೇಜಿನಲ್ಲಿ 100 ವಿದ್ಯಾರ್ಥಿ ಶಿಕ್ಷಕರ ಅನುಮೋದಿತ ಪ್ರವೇಶಾವಕಾಶದೊಂದಿಗೆ ಒಂದು ವರ್ಷದ ಬಿ.ಎಡ್ (B.Ed.) ಕೋರ್ಸ್ ಅನ್ನು ನಡೆಸಲಾಗುತ್ತಿದೆ.

ಡಾನ್ ಬಾಸ್ಕೋ ಸಂಸ್ಥೆಯು 2005ರಲ್ಲಿ ಡಾನ್ ಬಾಸ್ಕೋ ಕಾಲೇಜ್ ಆಫ್ ಟೀಚರ್ ಎಜುಕೇಶನ್ ಅನ್ನು ತುರಾದಲ್ಲಿ ಸ್ಥಾಪಿಸಿತು. ಈ ಸಂಸ್ಥೆಯು ವಾರ್ಷಿಕವಾಗಿ 100 ವಿದ್ಯಾರ್ಥಿ ಶಿಕ್ಷಕರ ಪ್ರವೇಶಾತಿಯ ನಿಟ್ಟಿನ NCTE ಮಾನ್ಯತೆ ಮತ್ತು ಅನುಮತಿಯೊಂದಿಗೆ ಒಂದು ವರ್ಷದ ಬಿ.ಎಡ್ (B.Ed) ಕಾರ್ಯಕ್ರಮಗಳನ್ನು ಪ್ರಾರಂಭಿಸಿತು.

ಇವುಗಳ ಜೊತೆಗೆ, ಖಾಸಗಿ ಸರ್ಕಾರೇತರ ಪ್ರಾಥಮಿಕ ಶಿಕ್ಷಕರ ಶಿಕ್ಷಣ ಸಂಸ್ಥೆಗಳು ಸಹ ಈಗಾಗಲೇ ಅಸ್ತಿತ್ವದಲ್ಲಿದ್ದವು, ಅವುಗಳೆಂದರೆ 1962ರಲ್ಲಿ ಜೈನ್ತಿಯಾ ಹಿಲ್ಸ್ ನಲ್ಲಿ ಪ್ರಾರಂಭವಾದ ಸೇಂಟ್ ಮೇರಿಸ್ ಮಜ್ಜರೆಲ್ಲೊ ಮತ್ತು 1977ರಲ್ಲಿ ಪೂರ್ವ ಖಾಸಿ ಹಿಲ್ಸ್‌ನ, ಮರ್ಬಿರ್ಬಿಸುವಿನಲ್ಲಿ ಸ್ಥಾಪನೆಯಾದ ಉಮ್ ಜಿಂಗ್ ಶೈ ತರಬೇತಿ ಕೇಂದ್ರ. ಈ ಸಂಸ್ಥೆಗಳು ರಾಜ್ಯದ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿ ಅಗತ್ಯತೆಗಳನ್ನು ಪೂರೈಸುವ ಸಲುವಾಗಿ ಕಾರ್ಯನಿರ್ವಹಿಸುತ್ತಿದ್ದವು. ಆದರೆ NCTEಯ ಮಾನ್ಯತೆಯ ನಿರಾಕರಣೆಯಿಂದಾಗಿ, NCTE ನಿಯಮಗಳ ಅನುಷ್ಠಾನದೊಂದಿಗೆ ಈ ಎರಡು ಸಂಸ್ಥೆಗಳು ಕ್ರಮವಾಗಿ 1996 ಮತ್ತು 2000ನೇ ಇಸವಿಯಲ್ಲಿ ತನ್ನ ಕಾರ್ಯಚಟುವಟಿಕೆಗಳನ್ನು ನಿಲ್ಲಿಸಬೇಕಾಯಿತು. ಎನ್‌ಪಿಇ (1986) ಯಲ್ಲಿ ರೂಪಿಸಲಾದ 'ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳು' [DIET (ಡಯಟ್‌ಗಳು)] 2000ನೇ ಇಸವಿಯಲ್ಲಿ ರಾಜ್ಯದ ಮೂರು ಜಿಲ್ಲೆಗಳಲ್ಲಿ ಪ್ರಪ್ರಥಮವಾಗಿ ಸ್ಥಾಪಿಸಲ್ಪಟ್ಟವು. ಇವುಗಳು ಜೈನ್ತಿಯಾ ಹಿಲ್ಸ್ ಜಿಲ್ಲೆಯ ಥಡ್ಲಸ್ಕೈನ್, ಪೂರ್ವ ಖಾಸಿ ಹಿಲ್ಸ್ ಜಿಲ್ಲೆಯ ಚಿರಾಪುಂಜಿ, ಮತ್ತು ಪಶ್ಚಿಮ ಗಾರೊ ಹಿಲ್ಸ್ ಜಿಲ್ಲೆಯ ರೆಸುಬೆಲ್ಪಾರಾಗಳಲ್ಲಿ ಪ್ರಾರಂಭಿಸಲ್ಪಟ್ಟವೆ. ನಂತರದಲ್ಲಿ, ಇತರೆ ನಾಲ್ಕು ಡಯಟ್‌ಗಳನ್ನು ಸಹ ಸ್ಥಾಪಿಸಲಾಯಿತು. ಇವುಗಳು 2005–06ನೇ ಶೈಕ್ಷಣಿಕ ವರ್ಷದಿಂದ ಕಾರ್ಯನಿರ್ವಹಿಸಲು ಪ್ರಾರಂಭಿಸಿದವು. ಅವುಗಳೆಂದರೆ ರಿ–ಭೋಯ್ನ ಸಾಯ್ದೆನ್, ದಕ್ಷಿಣ ಗಾರೊ ಹಿಲ್ಸ್ ನ ಬಾಘ್ಮಾರಾ, ಪಶ್ಚಿಮ ಗಾರೊ ಹಿಲ್ಸ್‌ನ ತುರಾ ಮತ್ತು ಪಶ್ಚಿಮ ಖಾಸಿ ಹಿಲ್ಸ್ ಜಿಲ್ಲೆಯ ನೊಂಗ್ ಸ್ಟೊಯಿನ್ ಈ ಡಯಟ್‌ಗಳ ಮುಖ್ಯ ಉದ್ದೇಶವೆಂದರೆ, ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಸೇವಾ–ಪೂರ್ವ ಮತ್ತು ಸೇವಾ–ನಿರತ ಶಿಕ್ಷಕರ ಶಿಕ್ಷಣ ಕಾರ್ಯಕ್ರಮವನ್ನು ನೀಡುವ ಮೂಲಕ ಪ್ರಾಥಮಿಕ ಶಿಕ್ಷಣದ ಅಗತ್ಯತೆಗಳನ್ನು ಪೂರೈಸುವುದು ಮತ್ತು ವಯಸ್ಕರ ಮತ್ತು ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮಗಳ ಸೂಕ್ತ ಕಾರ್ಯನಿರ್ವಹಣೆಗಾಗಿ ವಯಸ್ಕರಿಗೆ ಮತ್ತು ಅನೌಪಚಾರಿಕ ಸಿಬ್ಬಂದಿಗೆ ತರಬೇತಿ ನೀಡುವುದು.

● ಅನುವಾದಕರು: **ಲತಾ ಕೆ ಸಿ** | ಪರಿಶೀಲಕರು: **ಶೈಲಜಾ ಜಿ ಪಿ**

---

**ಡಾ. ಬಾಶಾನ್**ರವರು ಶಿಲ್ಲಾಂಗ್‌ನ DERTಯಲ್ಲಿ ಹಿರಿಯ ಅಧ್ಯಾಪಕರಾಗಿದ್ದು, ಶಿಕ್ಷಕರ ಶಿಕ್ಷಣ ಮತ್ತು ಸಮಾಜ ವಿಜ್ಞಾನ ಕ್ಷೇತ್ರದಲ್ಲಿ 15 ವರ್ಷಗಳಿಗಿಂತಲೂ ಹೆಚ್ಚಿನ ಕಾಲ ಕೆಲಸ ಮಾಡಿರುವ ಅನುಭವವನ್ನು ಹೊಂದಿದ್ದಾರೆ. ಈ ಅವಧಿಯಲ್ಲಿ ಅವರು ಶಿಕ್ಷಕರ ಶಿಕ್ಷಣದ ಕೇಂದ್ರೀಯ ಪ್ರಾಯೋಜಿತ ಯೋಜನೆ, ಸಂಶೋಧನಾ ಚಟುವಟಿಕೆಗಳು, ಶಿಕ್ಷಕರು ಮತ್ತು ಶಿಕ್ಷಕರ ಶಿಕ್ಷಣ ಸೇವಾ–ನಿರತ ತರಬೇತಿ ಕಾರ್ಯಕ್ರಮಗಳು, ಶೈಕ್ಷಣಿಕ ತಂತ್ರಜ್ಞಾನ, ಯೋಜನೆ ಮತ್ತು ಆಡಳಿತ ಇತ್ಯಾದಿ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಪ್ರಸ್ತುತ ಅವರು ರಾಜ್ಯದ ಕೆಲವು ಶಾಲೆಗಳ ದೃಷ್ಟಾಂತ ಅಧ್ಯಯನದಲ್ಲಿ (case study) ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಜೊತೆಗೆ ಶಾಲೆಯ ಸುಧಾರಣಾ ಯೋಜನೆಯ ಪರಿಕಲ್ಪನೆಯ ಮೂಲಕ ರಾಜ್ಯದಲ್ಲಿ ಕಾರ್ಯನಿರ್ವಹಿಸದೇ ಇರುವ ಶಾಲೆಗಳ ಸುಧಾರಣೆಯತ್ತ ಗಮನಹರಿಸಿದ್ದಾರೆ. ಇವರನ್ನು bashandesmond@gmail.com ಇಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.